

**ಕರ್ನಾಟಕ ವಿಧಾನ ಪರಿಷತ್ತು**

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1175 (1374+1375) |
| ಸದಸ್ಯರ ಹೆಸರು | : | ಎಸ್.ವ್ಹಿ.ಸಂಕನೂರ ಮತ್ತು ನಿರಾಣಿ ಹಣಮಂತ್ ರುದ್ರಪ್ಪ |
| ಉತ್ತರಿಸುವ ದಿನಾಂಕ | : | 18.03.2020 |
| ಉತ್ತರಿಸುವ ಸಚಿವರು | : | ಉಪ ಮುಖ್ಯಮಂತ್ರಿಗಳು, ಲೋಕೋಪಯೋಗಿ ಮತ್ತು ಸಮಾಜ ಕಲ್ಯಾಣ ಸಚಿವರು |

| ಕ್ರ. ಸಂ | ವಿಷಯ | ಉತ್ತರ |
|---|---|---|
| ಅ) | ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ (ಕ್ರೈಸ್) ವತಿಯಿಂದ ನಡೆಯುತ್ತಿರುವ ವಸತಿ ಶಾಲೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳ ಸಮಸ್ಯೆಗಳು ಸರ್ಕಾರದ ಗಮನಕ್ಕೆ ಬಂದಿವೆಯೇ; | ಹೌದು |
| ಆ) | ಕುಮಾರನಾಯಕ್ ವರದಿ ಪ್ರಕಾರ ಹೆಚ್ಚುವರಿಯಾಗಿ ಒಂದು ವಾರ್ಷಿಕ ವೇತನ ಬಡ್ತಿ ಸೌಲಭ್ಯ ನೀಡಲಾಗಿದೆಯೇ; ಸದರಿ ವರದಿಯಂತೆ ನೌಕರರುಗಳಿಗೆ ಸೌಲಭ್ಯಗಳನ್ನು ಕಲ್ಪಿಸುವಲ್ಲಿ ಸರ್ಕಾರ ವಿಳಂಬ ನೀತಿ ಅನುಸರಿಸುತ್ತಿರುವುದಕ್ಕೆ ಕಾರಣಗಳೇನು; ಕ್ರೈಸ್ ಅಡಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಗಳಿಗೆ ಕೆ.ಜಿ.ಐ.ಡಿ. ಸೌಲಭ್ಯ ನೀಡುವ ಕುರಿತು ಸರ್ಕಾರ ಚಿಂತನೆ ನಡೆಸಿದೆಯೇ; | ಶ್ರೀ ಕುಮಾರ ನಾಯಕ್ ಸಮಿತಿಯ ಶಿಫಾರಸ್ಸಿನಂತೆ ಶಿಕ್ಷಣ ಇಲಾಖೆಯ ಪ್ರೌಢ ಶಿಕ್ಷಣ ವಿಭಾಗದ ಶಿಕ್ಷಕರುಗಳಿಗೆ ಮಂಜೂರು ಮಾಡಲಾದ ಹೆಚ್ಚುವರಿ ವೇತನ ಬಡ್ತಿಯನ್ನು 2012 ರ ಪರಿಷ್ಕೃತ ವೇತನ ಶ್ರೇಣಿಯಲ್ಲಿ ಮಂಜೂರು ಮಾಡಲಾಗಿರುತ್ತದೆ. ಪ್ರಸ್ತುತ 2012 ರ ಪರಿಷ್ಕೃತ ವೇತನ ಶ್ರೇಣಿಗಳು ಚಾಲ್ತಿಯಲ್ಲಿರುವುದಿಲ್ಲವಾದ್ದರಿಂದ, ಹೆಚ್ಚುವರಿ ವೇತನ ಬಡ್ತಿಯನ್ನು ಈ ಹಂತದಲ್ಲಿ ಪರಿಗಣಿಸಿ ಮಂಜೂರು ಮಾಡಲು ನಿಯಮಗಳಲ್ಲಿ ಅವಕಾಶವಿರುವುದಿಲ್ಲ.<br><br>ವಸತಿ ಶಾಲೆ ಶಿಕ್ಷಕರುಗಳ ಕರ್ತವ್ಯಗಳು ಮತ್ತು ಶಿಕ್ಷಣ ಇಲಾಖೆಯ ಶಿಕ್ಷಕರುಗಳ ಕರ್ತವ್ಯಗಳನ್ನು ಪರಸ್ಪರ ಹೋಲಿಸಲು ಬರುವುದಿಲ್ಲ. ಎರಡೂ ವೃಂದಗಳ ವೃಂದ ಮತ್ತು ನೇಮಕಾತಿ ನಿಯಮಗಳು ಬೇರೆ ಬೇರೆಯಾಗಿದ್ದು ಒಂದರ ನಿಯಮವನ್ನು ಮತ್ತೊಂದಕ್ಕೆ ಹೋಲಿಸಿ ಅನ್ವಯಿಸಲು ನಿಯಮಗಳಲ್ಲಿ ಅವಕಾಶವಿರುವುದಿಲ್ಲ ಎಂಬ ಕಾರಣಗಳಿಂದ ಆರ್ಥಿಕ ಇಲಾಖೆಯು ಪ್ರಸ್ತಾವನೆಯನ್ನು ತಿರಸ್ಕರಿಸಿದೆ. |
| ಇ) | ಕ್ರೈಸ್ ಅಧೀನದಲ್ಲಿ ನಡೆಯುತ್ತಿದ್ದು ಅಲ್ಪಸಂಖ್ಯಾತ ವಸತಿ ಶಾಲೆಗಳನ್ನು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯಲ್ಲಿ ವಿಲೀನಗೊಳಿಸಿದಂತೆ ಬಿ.ಸಿ.ಎಂ ಮೊರಾರ್ಜಿ/ರಾಣಿ ಚೆನ್ನಮ್ಮಾ ವಸತಿ ಶಾಲೆಗಳನ್ನು ಹಿಂದುಳಿದ ವರ್ಗಗಳ | ಅಲ್ಪಸಂಖ್ಯಾತ ಕಲ್ಯಾಣ ಇಲಾಖೆಯವರು ಅವರದೇ ಆದ ಕಾರಣಗಳಿಂದ ಅಲ್ಪಸಂಖ್ಯಾತ ವಸತಿ ಶಾಲೆಗಳನ್ನು ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದಿಂದ ಬೇರ್ಪಡಿಸಿ ಸಿಬ್ಬಂದಿಗಳನ್ನು ಸಹ ನೇಮಿಸಿಕೊಂಡಿರುತ್ತಾರೆ. |

| | | |
|---|---|---|
| | ಕಲ್ಯಾಣ ಇಲಾಖೆಗೆ ವಿಲೀನಗೊಳಿಸಿ, ಸದರಿ ನೌಕರರುಗಳಿಗೆ ಸೌಲಭ್ಯಗಳನ್ನು ಒದಗಿಸಲು ಸರ್ಕಾರ ವಿಳಂಬ ಮಾಡುತ್ತಿರುವುದಕ್ಕೆ ಕಾರಣಗಳೇನು; | ವಿವಿಧ ಉದ್ದೇಶಗಳನ್ನು ಈಡೇರಿಸುವ ಸಲುವಾಗಿ ಸರ್ಕಾರದಲ್ಲಿ ಸಂಘ/ಮಂಡಳ/ನಿಗಮಗಳನ್ನು ಸ್ಥಾಪಿಸಲಾಗಿರುತ್ತದೆ. ಅದರಂತೆ ಸಮಾಜಕಲ್ಯಾಣ ಇಲಾಖೆಯಲ್ಲಿ ಸಹ ಗ್ರಾಮೀಣ ಪ್ರದೇಶದ ಬಡ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ಗುಣಮಟ್ಟದ ಶಿಕ್ಷಣ ಒದಗಿಸಲು ವಸತಿ ಶಾಲೆಗಳನ್ನು ಪ್ರಾರಂಭಿಸಿ ನಿರ್ವಹಿಸಲು ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘವನ್ನು ಸ್ಥಾಪಿಸಲಾಗಿದೆ.<br><br>ಈ ಸಂಘದ ವೃಂದ ಮತ್ತು ನೇಮಕಾತಿ ನಿಯಮಗಳಂತೆ ಬೋದಕ ಮತ್ತು ಬೋದಕೇತರ ಸಿಬ್ಬಂದಿಗಳನ್ನು ನೇಮಿಸಲಾಗುತ್ತಿದೆ. ಮಂಜೂರಾದ ಗ್ರೂಪ್-ಡಿ ಹುದ್ದೆಗಳನ್ನು ಆರ್ಥಿಕ ಇಲಾಖೆಯ ನಿರ್ದೇಶನದನ್ವಯ ಹೊರಗುತ್ತಿಗೆ ಆಧಾರದಲ್ಲಿ ನೇಮಿಸಿಕೊಳ್ಳಲಾಗುತ್ತಿದೆ. ಶಿಕ್ಷಣ ಇಲಾಖೆಯಿಂದ ನೇಮಿಸಿಕೊಂಡಿರುವ ಶಿಕ್ಷಕರುಗಳಿಗೆ ನೀಡುವ ವೇತನದಂತೆಯೇ ಸಂಘದ ಶಿಕ್ಷಕರುಗಳಿಗೂ ಸಹ ನೀಡಲಾಗುತ್ತಿದೆ. ಅಲ್ಲದೇ ಶಾಲೆ ಆವರಣದಲ್ಲಿ ಎಲ್ಲಾ ಬೋದಕ/ ಬೋದಕೇತರ ಸಿಬ್ಬಂದಿಗಳಿಗೆ ವಸತಿ ಸೌಕರ್ಯ ಮತ್ತು ಇತರೇ ಸವಲತ್ತುಗಳನ್ನು ನೀಡಲಾಗುತ್ತಿದೆ.<br><br>ಸಂಘವು ಕರ್ನಾಟಕ ಸಹಕಾರ ಸಂಘಗಳ ನೋಂದಣಿ ಕಾಯ್ದೆ 1960 ರಡಿಯಲ್ಲಿ ಸ್ಥಾಪಿತವಾದ ಸಂಸ್ಥೆಯಾಗಿದ್ದು, ಸ್ವಾಯತ್ತ ಸಂಸ್ಥೆ / ಸಂಘ ಸಂಸ್ಥೆಗಳ ಸಿಬ್ಬಂದಿಗಳನ್ನು ರಾಜ್ಯ ಸಿವಿಲ್ ಸೇವೆಯಲ್ಲಿ ವಿಲೀನಗೊಳಿಸಲು ನಿಯಮಗಳಲ್ಲಿ ಅವಕಾಶವಿರುವುದಿಲ್ಲ. |
| ಈ) | ಸದರಿ ಶಾಲೆಗಳನ್ನು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಲ್ಲಿ ವಿಲೀನಗೊಳಿಸಿ, ಇತರೇ ಇಲಾಖೆಯ ಸರ್ಕಾರಿ ನೌಕರರಿಗೆ ಮತ್ತು ಶಿಕ್ಷಕರಿಗೆ ಇರುವ ಸೌಲಭ್ಯಗಳಂತೆ ಸದರಿ ನೌಕರರುಗಳೀಗೆ ಸೌಲಭ್ಯಗಳನ್ನು ಕಲ್ಪಿಸಲು ಇನ್ನಾದರೂ ಸರ್ಕಾರ ಮುಂದಾಗುವುದೇ ಮತ್ತು ಯಾವ ಕಾಲಮಿತಿಯಲ್ಲಿ ಸದರಿ ಪ್ರಕ್ರಿಯೆಯನ್ನು ಪೂರ್ಣಗೊಳಿಸಲಾಗುವುದು? | ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಯಡಿ ಕಾರ್ಯನಿರ್ವಹಿಸುತ್ತಿರುವ ಖಾಯಂ ಪ್ರಾಂಶುಪಾಲರು ಹಾಗೂ ಶಿಕ್ಷಕರುಗಳಿಗೆ ಕೆ.ಜಿ.ಐ.ಡಿ., ಜ್ಯೋತಿ ಸಂಜೀವಿನಿ, ಒಂದು ವಿಶೇಷ ವೇತನ ಬಡ್ತಿ ಮತ್ತು ದಿನಾಂಕ: 01.04.2018 ರಿಂದ ಜಾರಿಗೆ ಬರುವಂತೆ ನಿವೃತ್ತಿ ಮತ್ತು ಮರಣ ಉಪದಾನವನ್ನು ಹೊರತುಪಡಿಸಿ ಶಿಕ್ಷಣ ಇಲಾಖೆಯ ಶಿಕ್ಷಕರುಗಳಿಗೆ ನೀಡುತ್ತಿರುವ ಎಲ್ಲಾ ಸವಲತ್ತುಗಳನ್ನು ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ಖಾಯಂ ಶಿಕ್ಷಕರುಗಳಿಗೆ ನೀಡಲಾಗುತ್ತಿದೆ. ಮುಂದುವರೆದು ನೂತನ ಪಿಂಚಣಿ ಯೋಜನೆಯನ್ನು ಸಹ ಶಿಕ್ಷಕರುಗಳು ಸೇವೆಗೆ ಸೇರಿದ ದಿನಾಂಕದಿಂದ ವಿಸ್ತರಿಸಲಾಗಿದೆ. |

ಸಕಇ 112 ಮೊದೇಶಾ 2020

**(ಗೋವಿಂದ ಎಂ. ಕಾರಜೋಳ)**
ಉಪ ಮುಖ್ಯಮಂತ್ರಿಗಳು ಹಾಗೂ ಲೋಕೋಪಯೋಗಿ
ಮತ್ತು ಸಮಾಜ ಕಲ್ಯಾಣ ಸಚಿವರು